ವಿ. ಟಿ. ಎಸ್. ರಾವ್*

# ತಾಳ ಪತ್ರಗಳಲ್ಲಿ ಚಿತ್ರ ವಿನ್ಯಾಸ

## (ಮೂಡಬಿದ್ರೆಯ ಹೊಯ್ಸಳರ ಕಾಲದ ತಾಳ ಪತ್ರ ಚಿತ್ರಗಳ ವಿಶೇಷ ಉಲ್ಲೇಖದೊಂದಿಗೆ)

ಒಂದು ದೇಶದ ಪ್ರಾಗೈತಿಹಾಸಿಕ ಸಂಸ್ಕೃತಿಯ ಇತಿಹಾಸವನ್ನು ಬರೆಯುವಾಗ ಆದೇಶದ ಕಲಾ ಅವಶೇಷಗಳ ಅವಲೋಕನ ಅತಿ ಪ್ರಾಮುಖ್ಯತೆಯನ್ನು ಪಡೆಯುತ್ತದೆ. ಅವುಗಳಲ್ಲಿ ಸಚಿತ್ರ ಸಾಹಿತ್ಯ ಭಂಡಾರವೂ ಒಂದು ನಮ್ಮ ದೇಶದ ಪುರಾತನ ಲೇಖನ ಸಾಮಗ್ರಿಯಾದ ತಾಳೆಯಗರಿಗಳ ಮೇಲೆ ಸಾಹಿತ್ಯದ ಸಾಮರಸ್ಯವಾಗಿ ಚಿತ್ರಿತವಾಗಿರುವ ಚಿತ್ರಗಳು ನಮ್ಮ ಸಾಂಸ್ಕೃತಿಕ ಪರಂಪರೆಗೆ ಭವ್ಯ ನಿದರ್ಶನಗಳಾಗಿವೆ. ತಾಳೆಯ ಮರಗಳಲ್ಲಿ ವೈವಿಧ್ಯಮಯ ತಳಿಗಳಿವೆ ಯಾದರೂ ಪ್ರತ್ಯೇಕವಾಗಿ ಲೇಖನ ಹಾಗೂ ಚಿತ್ರ ಲೇಖನಗಳಿಗೆ ಬಳಸಲ್ಪಡುತ್ತಿದ್ದುವು ಕೇವಲ ಎರಡು ಜಾತಿಯ ತಳಿಗಳ ಎಲೆಗಳು ಮಾತ್ರ ಅವೆಂದರೆ ಪೈಲ್ಮೈರ ಅಥವ ಬೊರಾಸಸ್ ಫ್ಲಾಬೆಲಿಫೆರ ಮತ್ತು ಟ್ಯಾಲಿಪಾಟ್ ಅಥವ ಕೋರಿಫ ಅಂಬ್ರಾಕ್ಯುಲಿಫೆರ. ಮೊದಲನೆಯ ತಳಿ ಭಾರತ ಮತ್ತು ಸಿಂಹಳಗಳಲ್ಲಿ ಕಾಣಬರುವ ಒಂದು ಜಾತಿಯ ತಾಳೆಯಮರ, ಎರಡನೆಯದು ಬೀಸಣಿಗೆಯಾಕಾರದ ಗರಿಗಳುಳ್ಳ ಸಾಮಾನ್ಯವಾಗಿ ಏಷ್ಯಾದಲ್ಲೆಲ್ಲಾ ಬೆಳೆಯುವ ವಿಶಿಷ್ಟ ಜಾತಿಯ ತಾಳೆಮರ.

ಅತಿಪ್ರಾಚೀನ ತಾಳೆಗರಿಯ ಹಸ್ತಪ್ರತಿಗಳು ಟ್ಯಾಲಿಪಾಟ್ ತಳಿಯ ಗರಿಗಳ ಮೇಲೆ ಬರೆದ ಗ್ರಂಥ ಗಳಾಗಿವೆ. ಕಬ್ಬಿಣದ ಚೂಪಾದ ಕೂರ್ಚಿಕೆ ಅಥವ ಕಂಠದ ಸಹಾಯದಿಂದ ಬರವಣಿಗೆ ಹಾಗೂ ಸಚಿತ್ರ ಗಳನ್ನು ತಾಳ ಪತ್ರಗಳ ಮೇಲೆ ನಯವಾಗಿ ಕೊರೆದು ರಚಿಸುತ್ತಿದ್ದರು. ಅನಂತರ ಸ್ಥಳೀಯವಾಗಿ ಸಿಗುವ ಕಾಡಿಗೆ ಕಪ್ಪನ್ನು ಎಣ್ಣೆಯೊಂದಿಗೆ ಬೆರೆಸಿ ವಿಶೇಷ ರೀತಿಯ ಕಪ್ಪು ಬಣ್ಣವನ್ನು ತಯಾರಿಸಿಕೊಂಡು, ಆ ಬಣ್ಣವನ್ನು ನಯವಾಗಿ ತಾಳೆಗರಿಗಳ ಮೇಲೆ ಕೊರೆಯಲಾದ ಬರವಣಿಗೆ ಹಾಗೂ ಸಚಿತ್ರಗಳ ಮೇಲೆ ತೆಳುವಾಗಿ ಲೇಪಿಸುತ್ತಿದ್ದರು. ನಂತರ ಒಂದು ಬಟ್ಟೆಯಿಂದ ಆ ಕಪ್ಪು ಬಣ್ಣವನ್ನು ಒರೆಸಿದಾಗ, ಕಪ್ಪು ಬಣ್ಣವು ಕಂಠದಿಂದ ಕೊರೆದ ರೇಖೆಗಳಲ್ಲಿ ಸಂಗ್ರಹವಾಗಿ ಉಳಿದ ಬಣ್ಣವು ಬಟ್ಟೆಯೊಂದಿಗೆ ತೆಗೆಯಲ್ಪಟ್ಟಾಗ ಕಪ್ಪು ರೇಖೆಗಳು ಸ್ಫುಟವಾಗಿ ತಾಳೆಗರಿಗಳ ಮೇಲೆ ರೂಪಿತವಾಗುತ್ತಿದ್ದುವು.

ಹೀಗೆ ರೂಪಿತವಾದ ಚಿತ್ರಗಳಿಗೆ ತುಂಬಾ ನಾಜೂಕಿನ ತೂಲಿಕೆ ಅಥವಾ ಬ್ರಷ್‌ನಿಂದ ಬೇಕಾದ ವರ್ಣಗಳನ್ನು ಹದವಾಗಿ ಲೇಪಿಸಿ ಚಿತ್ರವನ್ನು ಅಂದಗೊಳಿಸುತ್ತಿದ್ದರು ಆಭರಣಗಳು, ಆಸನಗಳು, ಪ್ರಭಾವಲಯಗಳು ಇಂಥವುಗಳನ್ನು ಉಜ್ವಲಗೊಳಿಸಲು ಬೆಳ್ಳಿ ಹಾಗೂ ಬಂಗಾರದ ದ್ರವಗಳನ್ನು ಲೇಪಿಸಿ ಚಿತ್ರದ ಸೌಂದರ್ಯವನ್ನು ಇಮ್ಮಡಿಗೊಳಿಸುತ್ತಿದ್ದರು.

ರಾಜ ಲೇಖಕರು ತಮ್ಮ ಕುಶಲ ಕಲೆಯಲ್ಲಿ

* ನಂ. ೩೪, ಆರನೆಯ ಮುಖ್ಯರಸ್ತೆ, 'ಎನ್'ಬ್ಲಾಕ್, ರವೀಂದ್ರನಾಥ ಠಾಗೋರ್‌ನಗರ, ಬೆಂಗಳೂರು–೫೬೦೦೩೨

ನಿಷ್ಣಾತರು ಕೇವಲ ಅಲಂಕಾರಾಕ್ಷರ ಲಿಪಿಕರಲ್ಲದೆ ಚಿತ್ರ ರೇಖಾ ಲೇಖನ, ವರ್ಣಲೇಪನಗಳಲ್ಲಿಯೂ, ಪರಿಣತರು. ಅವರು ರಾಜಾಶ್ರಯದ ಛತ್ರಿಗಳಡಿಯಲ್ಲಿ ಸನ್ಮಾನಿತ ರಾಗಿದ್ದು ತಮ್ಮ ಹೆಸರುಗಳನ್ನೂ ಬಿರುದುಗಳನ್ನೂ ತಮ್ಮ ಹಸ್ತಪ್ರತಿಗಳಲ್ಲಿ ಉಲ್ಲೇಖಿಸಿರುವರು, ಉದಾಹರಣೆಗೆ ಸೇನ ದೊರೆ ಆದಿತ್ಯಸೇನನ ಆಶ್ರಯದಲ್ಲಿದ್ದ ರಾಜಲೇಖಕ ಸೂಕ್ಷ್ಮಶಿವನು ತನ್ನನ್ನು ಸೌಂದರ್ಯ ಜನಕನೆಂದು ವರ್ಣಿಸಿಕೊಂಡಿರುವನು. ಮತ್ತೊಬ್ಬ ರಾಜಲಿಪಿಕ ಮಹೀಧರನು ತನ್ನ ಸುಂದರ ಚಿತ್ರಗಳನ್ನು ಮತ್ತು ಸುಂದರ ಲಿಪಿಯನ್ನು ಆಕಾಶದಲ್ಲಿನ ತಾರಾ ಚಂದ್ರರಿಗೆ ಹೋಲಿಸಿರುವನು, ಹನ್ನೆರಡನೆಯ ಶತಮಾನದ ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ಆಸ್ಥಾನ ಲೇಖಕ ಸೋವರನಿಯು ಪ್ರಾಣಿ ಪಕ್ಷಿ ಚಿತ್ರಗಳ ರಚನೆಯಲ್ಲಿ ತಾನು ಅಸಮಾನನೆಂದೂ ತನ್ನನ್ನು ಮೀರಿಸುವ, ಲಿಪಿಕನು ಇನ್ನೂ ಹುಟ್ಟಿಲ್ಲವೆಂದು ತನ್ನನ್ನು ಹೊಗಳಿಕೊಂಡಿರುವನು, ಪೂರ್ವ ಚಾಲುಕ್ಯ ದೊರೆ ನರೇಂದ್ರ ಮೃಗರಾಜನ ರಾಜ ಲೇಖಕನಿಗೆ "ಅಕ್ಷರ ಲಾಲಿತಾ ಚಾರ್ಯ" ಎಂಬ ಬಿರುದಿದ್ದುದಾಗಿ ಆದೊರೆಯ ರಾಜಪತ್ರ ಒಂದರಲ್ಲಿ ಬರೆದಿದೆ. ಸೋಮೇಶ್ವರನೆಂಬ ಮತ್ತೊಬ್ಬ ಲಿಪಿಕನು ತನ್ನನ್ನು ಚಿತ್ರ ಪ್ರಿಯನೆಂದೂ, ವರ್ಣವೈವಿಧ್ಯದಲ್ಲಿ ನಿಪುಣನೆಂದೂ ನಿರೂಪಿಸಿಕೊಂಡಿರುವನು.

ಲಭ್ಯವಿರುವ ಪ್ರಾಚೀನ ತಾಳ ಪತ್ರಗ್ರಂಥ ಎರಡನೆಯ ಶತಮಾನದ ಅಶ್ವಘೋಷ ಕವಿಯ ನಾಟಕ. ಅದಕ್ಕೂ ಪ್ರಾಚೀನ ಗ್ರಂಥಗಳು ಪಾಲರ ಕಾಲದವು ಆ ಗ್ರಂಥಗಳಲ್ಲಿ ರಚಿತವಾದ ಚಿತ್ರಗಳ ರೇಖಾ ಚಾತುರ್ಯವು ಪಾಲರ ಶ್ರೇಷ್ಠಮಟ್ಟದ ಕಲೆಯ ಸ್ವರೂಪವನ್ನು ಬಿಂಬಿಸುತ್ತವೆ. ಈ ಚಿತ್ರಗಳಲ್ಲಿ ರೇಖೆಗಳು ಅತ್ಯಂತ ನಿರ್ಣಾಯಕವಾಗಿ, ಶಕ್ತಿಯುತವಾಗಿ ಲಾವಣ್ಯ ಪೂರ್ಣವಾಗಿ ಗ್ರಂಥಗಳ ಕೇಂದ್ರ ಭಾಗದಲ್ಲಿ ಚಿತ್ರಿತವಾಗಿವೆ. ಇಕ್ಕೆಲಗಳಲ್ಲಿಯೂ ಗ್ರಂಥದ ಸಾಹಿತ್ಯವನ್ನು ಕೊರೆಯಲಾಗಿದೆ. ಬೌದ್ಧ ಜಾತಕಗಳನ್ನು ವಸ್ತುವಾಗುಳ್ಳ ಈ ಅನುಪಮ ಗ್ರಂಥಗಳಲ್ಲಿ ಚಿತ್ರಗಳು ವಿಪುಲವಾಗಿವೆ. ಇವುಗಳಲ್ಲಿ ಪ್ರಮುಖ ಗ್ರಂಥಗಳೆಂದರೆ "ಪ್ರಜ್ಞಾಪರಿಮಿತ" "ಗ್ರಂಥವ್ಯೂಹ" ಮತ್ತು "ಸಾಧನ ಮಾಲಾ" ಗ್ರಂಥಗಳು. ಕೊನೆಯ ಎರಡರಲ್ಲಿರುವ ಚಿತ್ರಗಳು "ಅತ್ಯಂತ ಸುಂದರವಾಗಿವೆ. ಈ ಗ್ರಂಥಗಳು ಪಾಲ ಅರಸು ಮಹೀಪಾಲನ ಕಾಲಕ್ಕೆ ಸೇರಿದವು.

ಇದರಂತೆಯೇ ಪಶ್ಚಿಮ ಭಾರತದ ಪ್ರಥಮ ತಾಳೆಗರಿ ಹಸ್ತಪ್ರತಿಗಳು ಹನ್ನೊಂದನೆಯ ಶತಮಾನದವು ಜೈನ ಧಾರ್ಮಿಕ ವಸ್ತುವನ್ನು ವಿಷಯವಾಗುಳ್ಳ ಇವುಗಳಲ್ಲಿರುವ ಪ್ರಖರ ವರ್ಣಗಳ ಸುಂದರ ಚಿತ್ರಗಳನ್ನು ಚಿನ್ನ ಮತ್ತು ಬೆಳ್ಳಿಯ ಲೇಪದೊಂದಿಗೆ ಶೃಂಗರಿಸಿರುವರು. ಕೇವಲ ಚಿತ್ರಗಳಷ್ಟೇ ಅಲ್ಲದೆ ಲಿಪಿಯನ್ನು ಚಿನ್ನದ ದ್ರಾವಣದಿಂದ ತುಂಬಿರುವರು ಈ ಗ್ರಂಥಗಳೆಂದರೆ "ಕಲ್ಪ ಸೂತ್ರ" "ಸಿದ್ಧ ಹೇಮ ಲಘುವೃತ್ತಿ" "ಕುಮಾರ ಪಾಲಚರಿತ" "ಕಾಲಕಾಚಾರ್ಯ ಚರಿತ"ಮುಂತಾದುವು. ಇನ್ನಿತರ ಸಚಿತ್ರ ಹಸ್ತ ಪ್ರತಿಗಳೆಂದರೆ ವಸಂತವಿಲಾಸ, ಬಾಲಗೋಪಾಲಸ್ತುತಿ, ಸಾಲಿಭದ್ರಚರಿತ ಮುಂತಾದ ಗ್ರಂಥಗಳು, ಇವುಗಳಲ್ಲಿರುವ ಚಿತ್ರಗಳು ನಿರಾಡಂಬರ ವರ್ಣಗಳಿಂದ ನಿಯಮಬದ್ಧ ಧೃಢರೇಖೆಗಳಿಂದ ಚಿತ್ರಿತ ವಾಗಿವೆ.

ಈ ಚಿತ್ರಗಳಲ್ಲಿ ಸಾಮಾನ್ಯವಾಗಿ ಮುಖ ಭಂಗಿಯ ಮೂರು ಪಾರ್ಶ್ವಗಳನ್ನು ತೋರಿಸುವುದರ ಜೊತೆಗೆ ಕೋನಾಕಾರದ ಮೂಗು, ದೊಡ್ಡ ಬೊಗಸೆ ಕಣ್ಣುಗಳು– ಚಿತ್ರಗಳ ವಿಶೇಷಣಗಳಾಗಿವೆ. ಈ ಗ್ರಂಥದಲಿಪಿಯೂ ಕುತೂಹಲಕಾರಿಯಾಗಿದೆ. ಈ ಚಿತ್ರಗಳ ಪರಂಪರೆಯೇ ಮುಂದೆ ಪರಿಣಾಮಕಾರಿಯಾದ ರಾಜಾಸ್ಥಾನೀ ಚಿಕಣಿ ಚಿತ್ರ ಶೈಲಿಯಾಗಿ ಇಂದಿಗೂ ಮುಂದುವರೆಯುತ್ತಿದೆ.

ದಕ್ಷಿಣದಲ್ಲಿ ಜೈನಕಾಶಿ ಎಂದು ಪ್ರಸಿದ್ಧವಾಗಿರುವ ಮೂಡಬಿದ್ರಿಯ ಜೈನ ಮಠ ಸಿದ್ಧಾಂತ ಬಸದಿಯಲ್ಲಿ ಸುಸ್ಥಿತಿಯಲ್ಲಿ ಪೂಜೆಗೊಳ್ಳುತ್ತಿರುವ ಜೈನ ಧಾರ್ಮಿಕ ತಾಳೆಗರಿ ಹಸ್ತ ಪ್ರತಿಗಳು ಗಮನಾರ್ಹವಾದವು. ಇವು ಕ್ರಿಸ್ತ ಪೂರ್ವ ಒಂದನೆಯ ಶತಮಾನದವರಾದ ಗುಣಧರ ಮತ್ತು ಕ್ರಿಸ್ತಶಕ ಒಂದನೇ ಶತಮಾನದಲ್ಲಿದ್ದ ಧರಸೇನರೆಂಬ ಮಹಾನ್ ಆಚಾರ್ಯರ ಬೋಧನೆಗಳನ್ನು ಶೇಖರಿಸಿ ಸಂಗ್ರಹಿಸಿದ ಜೈನತತ್ವ ಶಾಸ್ತ್ರಗಳಾದ "ಕಷಾಯ ಪಾಹುಡ" "ಶ್ರುತಸ್ಕಂದಾಗಮ"ಗಳಿಗೆ ಬರೆದಿರುವ ಭಾಷ್ಯಗಳು, ಇವುಗಳ ಕರ್ತೃ ವೀರಸೇನರೆಂಬ ಜೈನಯತಿಗಳು ಇವೇ ಧವಳ, ಜಯಧವಳ ಮಹಾಧವಳ

ಗ್ರಂಥಗಳು ಮೂಲ ದಿಗಂಬರ ಸಂಪ್ರದಾಯದ ೧೨ ಅಂಗಗಳ ನಿರೂಪಣೆ ಇಲ್ಲಿದೆ. ಈ ಗ್ರಂಥಗಳಲ್ಲಿ ಉಪಯೋಗಿಸಿರುವ ಬಣ್ಣಗಳು ವನಸ್ಪತಿ ಮತ್ತು ಧಾತು ಮೂಲದವು. ಪ್ರಖರತೆಗಾಗಿ ಧಾತುವರ್ಣಗಳನ್ನು ಬಳಸಲಾಗಿದೆ. ಮೂಲವರ್ಣಗಳಾದ ಗೈರಿಕ (ಕೆಂಪು), ನೀಲ, ಶುದ್ಧ (ಬಿಳುಪು,) ಹರಿದಳ (ಹಳದಿ), ಕಜ್ಜಲ (ಕಪ್ಪು) ಇವುಗಳನ್ನು ಪ್ರಮಾಣ ಬದ್ಧವಾಗಿ ಮಿಶ್ರಣ ಮಾಡಿ ಭಾವಾಭಿಜ್ಞತೆಗೆ ತಕ್ಕಂತೆ ತ್ಯಾಗದ ಸಂಕೇತಕ್ಕೆ ಕೆಂಪು ಕಾವಿಯನ್ನೂ, ಸರ್ವವ್ಯಾಪಕತೆಯ ಸಂಕೇತಕ್ಕೆ ನೀಲಿಯನ್ನೂ, ಸಂಪತ್ತಿನ ಸೂಚನೆಗೆ ಹಸಿರುವರ್ಣವನ್ನೂ ರೂಪಭೇದ, ಭಾವ ಲಾವಣ್ಯಗಳಿಗೆ ಅನುಗುಣವಾಗಿ ಲೇಪಿಸಿ ಸೀಮಿತ ಮಿತಿಯಾದ ತಾಳೆಗರಿಗಳ ಚಿಕ್ಕ ಅಂಕಣಗಳಲ್ಲಿ ಸುಂದರ ಚಿತ್ರಗಳನ್ನು ಬಿಡಿಸಿರುವರು

ಚಿತ್ರಗಳ ಅಂಚುಗಳಲ್ಲಿ ಬಿಡಿಸಿರುವ ವಿನ್ಯಾಸ ಮತ್ತು ರೇಖೆಗಳ ಲಾಸ್ಯ ಲಾಲಿತ್ಯಗಳು ಬೇಲೂರು ದೇವಾಲಯದಲ್ಲಿರುವ ತಾಮ್ರ ಶಾಸನಗಳ ವಿನ್ಯಾಸಗಳನ್ನೂ ಬಹುವಾಗಿ ಹೋಲುವುದರಿಂದಲೂ ಈ ತಾಮ್ರ ಶಾಸನಗಳ ಬರವಣಿಗೆಯೂ ತಾಳ ಪತ್ರಗಳ ಮೇಲಿನ ಬರವಣಿಗೆಯೂ ಏಕರೂಪವಾಗಿರುವುದರಿಂದಲೂ, ಈ ತಾಳ ಪತ್ರ ಚಿತ್ರಗಳು ಹೊಯ್ಸಳ ಚಕ್ರವರ್ತಿ ವಿಷ್ಣುವರ್ಧನನ ಕಾಲದವೆಂದು ಧೃಢವಾಗಿ ಹೇಳಬಹುದು.

ನಿರಾಡಂಬರ, ನಿರಾಲಂಕೃತ, ನಗ್ನ ಮೂರ್ತಿಗಳಾದ ಜಿನ ಬಿಂಬಗಳನ್ನು ಕಲಾವಿದನು ಚಾತುರ್ಯದಿಂದ ವಸ್ತುವಿನ ಗಾಂಭೀರ್ಯಕ್ಕೆ ಭಂಗ ಭಾರದಂತೆ ಮನೋಹರವಾಗಿ ಚಿತ್ರಿಸಿರುವನು, ಒಂದು ಚಿತ್ರದಲ್ಲಿ ಮಕರ ಪೀಠದ ಮೇಲೆ ಘರ್ಜಿಸುವ ಸಿಂಹಗಳ ಹಿನ್ನೆಲೆಯಲ್ಲಿ ಇಕ್ಕೆಲಗಳಲ್ಲಿ ಚೌರಿ ಬೀಸುವವರ ಸುಂದರ ಸಂಯೋಜನೆಯಿಂದ ನಿಷ್ಕರ್ಷಿತ ಪ್ರಮಾಣದಲ್ಲಿ ತೀರ್ಥಂಕರರ ಮತ್ತು ಚಾಮರ ಧಾರಿಗಳಾದ ಬುಧ ಮತ್ತು ನಾಗರಾಜರ ಚಿತ್ರಗಳು ಅತ್ಯಂತ ಸತ್ವ ಶಾಲಿಯಾಗಿ ಮೂಡಿಬಂದಿವೆ. ಈ ಚಿತ್ರದ ಕೆಳ ಅಂಕಣದಲ್ಲಿ ಪಾರ್ಶ್ವನಾಥಸ್ವಾಮಿಯ ನಿರಾಡಂಬರ ವೈರಾಗ್ಯಮೂರ್ತಿಯನ್ನು ಸೌಂದರ್ಯಕ್ಕೆ ಭಂಗ ಬಾರದ ರೀತಿಯಲ್ಲಿ ಚಿತ್ರಿಸಲಾಗಿದೆ.

ಮತ್ತೊಂದು ಚಿತ್ರದಲ್ಲಿ ಬಾಹುಬಲಿಯು ಲೌಕಿಕ ವ್ಯವಹಾರಗಳನ್ನು ತೊರೆದು ಸರ್ವ ಸಂಗ ತ್ಯಾಗ ಮಾಡಿ ತಪಸ್ಸಿಗೆ ಹೊರಟುನಿಂತಾಗ ಆತನ ಇಬ್ಬರು ಸಹೋದರಿಯರು ತಡೆಯಲು ಬರುತ್ತಿರುವ ದೃಶ್ಯ ಇದೇ ವಸ್ತುವನ್ನೊಳಗೊಂಡ ಎಲ್ಲೋರ ಗುಹಾದೇವಾಲಯದ ಭಿತ್ತಿ ಚಿತ್ರ ಒಂದನ್ನು ನೆನಪಿಗೆ ತರುತ್ತದೆ. ಕೆಳಗಿನ ಅಂಕಣದಲ್ಲಿ ಆಸನಾರೂಢಳಾದ ಶ್ರುತದೇವಿಯನ್ನು ಇಕೆಲ್ಕಗಳಲ್ಲಿ ಚಾಮರ ಧಾರಿ ಕನ್ಯೆಯರನ್ನೂ ಚಿತ್ರಿಸಿರುವ ರೇಖಾನೈಪುಣ್ಯ ಮತ್ತು ಲಾಲಿತ್ಯಗಳು ಅನುಪಮ ಅವರು ಬಾಗಿ ಬಳುಕಿದಂತೆ ತೋರಿಸುವ ಅವರ ಕಾಲಗಳೂ ಪಕ್ಕದ ಮಾವಿನ ಮರಗಳೂ ಅಂಚಿನ ವಿನ್ಯಾಸವೂ ಹೊಯ್ಸಳ ಚಿತ್ರಕಾರನ ಕಲಾಚಾತುರ್ಯಕ್ಕೆ ನಿದರ್ಶನಗಳಾಗಿವೆ.

ಮಗದೊಂದು ಚಿತ್ರದಲ್ಲಿ ಪಾರ್ಶ್ವನಾಥ ಸ್ವಾಮಿಯು ನಾಗ ಪೀಠದ ಮೇಲೆ ನಾಗಛತ್ರಿಯ ಕೆಳಗೆ ಧ್ಯಾನಮಗ್ನನಾಗಿ ಕುಳಿತಿರುವ ಭಂಗಿಯೂ ಇಕ್ಕೆಲಗಳಲ್ಲಿ ಕೈಮುಗಿದು ಕುಳಿತಿರುವ ಶಿಷ್ಯದ್ವಯರ ಮುಖಭಾವ ಸಂಯೋಜನೆಗೆ ಉತ್ತಮ ಉದಾಹರಣೆಗಳಾದರೆ, ಕೆಳಗಣ ಅಂಕಣದಲ್ಲಿ ಮಾತಂಗ ಯಕ್ಷನು ತನ್ನ ವಾಹನವಾದ ಆನೆಯೊಂದಿಗೆ ತಲೆ ಎತ್ತಿ ತೊಡೆ ಎತ್ತಿ ಕುಳಿತಿರುವ ಭಂಗಿಯೂ, ಇಕ್ಕೆಲಗಳಲ್ಲಿರುವ ವೃಕ್ಷಗಳ ಸಂಯೋಜನೆಯೂ, ಸುಂದರವಾಗಿ ಚಿತ್ರಿತವಾಗಿದೆ.

ಇನ್ನೊಂದು ಚಿತ್ರದಲ್ಲಿ ಮಹಾಮಾನಸಿ ದೇವಿ ಮತ್ತು ಅಜಿತ ಯಕ್ಷರ ಚಿತ್ರಗಳು ಮಕರ ಪೀಠದ ಮೇಲೂ, ಹಂಸಪೀಠದ ಮೇಲೂ ಚಿತ್ರಿತವಾಗಿವೆ. ಈ ರೀತಿಯ ಅನೇಕ ಚಿತ್ರಗಳಲ್ಲಿ ಒಂದು ಚಿತ್ರ ಕಾಳಿ ಮತ್ತು ಅವಳ ಭಕ್ತರದಾಗಿದೆ. ಇದರಲ್ಲಿ ರಾಜ ರಾಣಿ ಮತ್ತು ಸೇವಕರಿರುವರು. ಈ ಚಿತ್ರದ ಮೇಲು ಭಾಗದ ಮುಖಗಳು ಕಿತ್ತು ಹೋಗಿರುವುದರಿಂದ ಗುರುತಿಸಲಾಗದಾಗಿದೆ. ಬಹುಶಃ ಇವು ವಿಷ್ಣುವರ್ಧನ ಮತ್ತು ಶಾಂತಲದೇವಿಯ ಚಿತ್ರಗಳೇ ಇರಬಹುದೇನೋ !

ಈ ಚಿತ್ರಗಳ ವಿಶಿಷ್ಟ ಅಭಿವ್ಯಕ್ತಿಗಳಾದ ಸೌಮ್ಯತೆಯು, ಪ್ರಸನ್ನತೆಯ ಕರ ಚರಣ ವಿನ್ಯಾಸಗಳು, ಶರೀರ ಭಂಗಿಗಳು ಮುಖಮುದ್ರೆಗಳು ಭಾವನಾತ್ಮಕತೆಯಿಂದ ಪಾರಮಾರ್ಥಿಕದ ದಿಕ್ಕಿನತ್ತ ಒಯ್ಯುತ್ತವೆ.

ಬೇರೆ ಲಿಪಿಕರು ತಮ್ಮ ಹೆಸರುಗಳನ್ನು ತಿಳಿಸಿದಂತೆ ಈ ಚಿತ್ರಕಾರರು ತಮ್ಮ ಹೆಸರುಗಳನ್ನು ಬರೆದಿಲ್ಲ. ಜೈನ ಕಾವ್ಯಗಳಲ್ಲಿ ದೊರೆಯುವ ಒಬ್ಬ ಚಿತ್ರಲಿಪಿಕನ ಹೆಸರು ಚೀರಘಟಿ.

ಹೊಯ್ಸಳ ಚಿತ್ರಕಾರರ ವಿಶಿಷ್ಟ ಶೈಲಿಯಾದ ವಿಶಾಲ ಎದೆ ಆಗಲವಾಗಿ ಚಿತ್ರಿಸಿದ ಕಣ್ಣುಗಳು ಎರಡೂ ಕಣ್ಣುಗಳನ್ನೂ ಎತ್ತಿ ತೋರಿಸುವ ವೈಶಿಷ್ಟ್ಯ ಮುಂದೆ ಬಂದಿರುವ ತ್ರಿಕೋನಾಕಾರದ ಚೂಪು ಮೂಗು ದೀರ್ಘವಾದ ಕಣ್ಣಿನ ಮೂಲೆಗಳು, ಬಿಲ್ಲಿನಾಕಾರದ ಹುಬ್ಬುಗಳು, ಕೋನಯುಕ್ತಮುಖ, ಸುಂದರ ಗಲ್ಲಗಳು ಸಪೂರಾದ ಸೊಂಟ ಹಾಗೂ ಹಿತಮಿತವಾದ ವರ್ಣ ಸಂಯೋಜನೆ ಇವುಗಳಿಂದ ಹೊಯ್ಸಳ ರಾಜಲಿಪಿಕರು ತಮ್ಮ ತನವನ್ನುಉಳಿಸಿಕೊಂಡು ಮುಂದಿನಕಲಾವಿದರಿಗೆ ಗುರುಗಳಾಗಿರುವರು, ಇವರ ಪ್ರಭಾವ ವಿಜಯನಗರದ ಚಿತ್ರಕಾರರ ಮೇಲೆ ಸ್ಪಷ್ಟವಾಗಿ ಬಿದ್ದಿರುವ ಸಂಗತಿ ಲೇಪಾಕ್ಷಿಯ ಪಾಪನಾಶೇಶ್ವರ ದುರ್ಗಾ ದೇವಾಲಯದ ಬಿತ್ತಿ ಚಿತ್ರಗಳಲ್ಲಿ ಸ್ಪಷ್ಟವಾಗಿ ಕಾಣಬಹುದು.